(ಅ. ವೇ. ೫-೨೪-೧೩, ೧೪), ನಿದ್ರೆಯು (ನಿದ್ರಾಧಿದೇವತೆಯು) ಯಮನ ರಾಜ್ಯದಿಂದ ಬರುತ್ತಾಳೆಂದೂ (ಅ. ವೇ. ೧೯-೫೬-೧) ಹೇಳಿದೆ.

ಯಮ ಎಂಬ ಪದಕ್ಕೆ 'ಅವಳಿ' ಎಂಬರ್ಥದಲ್ಲಿಯೂ ಪ್ರಯೋಗವಿದೆ. ಸಾಧಾರಣವಾಗಿ ಪುಲ್ಲಿಂಗ ಅಥವಾ ಸ್ತ್ರೀಲಿಂಗ ದ್ವಿವಚನದಲ್ಲಿ—ಮತ್ತು ಲಗಾಮು ಅಥವಾ ಮಾರ್ಗದರ್ಶಕ ಎಂಬರ್ಥದಲ್ಲಿಯೂ ಕೆಲವು ಪ್ರಯೋಗಗಳಿವೆ. ಯಮ ಮತ್ತು ಯಮಿಗಳು ಯಮಳರೆಂದೇ ಭಾವನೆ (೧೦-೧೦). ಇತರ ಗ್ರಂಥಗಳಲ್ಲಿ, ಯಮನನ್ನು ಮೃತ್ಯುದೇವತೆ, ದುಷ್ಟಶಿಕ್ಷಕ ಮೊದಲಾದ ರೀತಿಯಲ್ಲಿ ವರ್ಣಿಸುವಾಗ, ಈ ಪದವು ಯಮ್ (ಹತೋಟಿಯಲ್ಲಿಟ್ಟುಕೋ) ಧಾತುವಿನಿಂದ ನಿಷ್ಪನ್ನವಾದುದೆಂದು ಅಭಿಪ್ರಾಯವಿದ್ದರೂ, ಇದಕ್ಕೆ ವೇದಗಳಲ್ಲಿ ಆಧಾರವಿಲ್ಲವೇ ಇಲ್ಲವೆನ್ನಬಹುದು.

ಒಂದು ಪಕ್ಷಿಯು—ಸಾಧಾರಣವಾಗಿ ಗೂಬೆ ಅಥವಾ ಕಪೋತ—ಯಮನ ದೂತ (೧೦-೧೬೫-೪; ೧೦-೧೨೩-೬ನ್ನು ಹೋಲಿಸಿ); ಇಲ್ಲೆಲ್ಲಾ ಯಮನೇ ಮೃತ್ಯುವೆಂದು ಭಾವನೆ; ಆದುದರಿಂದ ಯಮ ಮತ್ತು ಮೃತ್ಯುಗಳಿಗೆ ಒಬ್ಬನೇ ದೂತನು (ಅ. ವೇ. ೮-೮-೧೧). ಇನ್ನೂ ಸ್ವಲ್ಪ ವಿಶದವಾಗಿ ಚರ್ಚಿಸಲ್ಪಟ್ಟಿರುವುದು ಯಮನ ನಿಯತ ದೂತರಾದ ಎರಡು ನಾಯಿಗಳ ವಿಷಯ (೧೦-೧೪-೧೦ರಿಂದ ೧೨). ಅವುಗಳಿಗೆ ನಾಲ್ಕು ಕಣ್ಣುಗಳು, ಅಗಲವಾದ ಮೂಗುಗಳು; ಮೈಮೇಲೆಲ್ಲಾ ಚುಕ್ಕೆ ಚುಕ್ಕೆಗಳು ಮತ್ತು ಕಂದುಬಣ್ಣ; ಅವು ಸರಮೆಯ ಮಕ್ಕಳು (ಸಾರಮೇಯು). ಯಮಲೋಕದ ಮಾರ್ಗವನ್ನು ರಕ್ಷಿಸುವ ರಕ್ಷಕರು (೧೦-೧೪-೧೧). ಅಥವಾ ಆ ದಾರಿಯಲ್ಲಿ ಕುಳಿತಿರುತ್ತವೆ (ಅ. ವೇ. ೧೮-೨-೧೨). ಈ ಎರಡು ನಾಯಿಗಳನ್ನೂ ದಾಟಿ, ಬೇಗ ಬೇಗ ಹೋಗಿ ಪಿತೃಗಳನ್ನು ಸೇರಿಕೋ ಎಂದು ಮೃತನಿಗೆ ಬುದ್ಧಿವಾದ (೧೦-೧೪-೧೦); ಮೃತನನ್ನು ಪಿತೃಗಳಿಗೆ ಒಪ್ಪಿಸಿ, ಅವನಿಗೆ ಕ್ಷೇಮಾರೋಗ್ಯಗಳನ್ನು ಅನುಗ್ರಹಿಸೆಂದು ಯಮನಿಗೆ ಪ್ರಾರ್ಥನೆ. ತಮ್ಮ ಜೀವರೂಪದಲ್ಲಿಯೇ ತೃಪ್ತರಾಗಿ, ಯಮನ ದೂತರಂತೆ, ಮನುಷ್ಯರ ಮಧ್ಯದಲ್ಲಿ ಸಂಚರಿಸುತ್ತಾರೆ. ಸೂರ್ಯನ ಬೆಳಕನ್ನು ಶಾಶ್ವತವಾಗಿ ಅನುಭವಿಸುವಂತೆ ಮನುಷ್ಯರಿಗೆ ಅನುಗ್ರಹ ಮಾಡಬೇಕೆಂದು ಅವರಿಗೂ (ನಾಯಿಗಳಿಗೂ) ಪ್ರಾರ್ಥನ ಇದೆ. ಮನುಷ್ಯರಲ್ಲಿ ಯಾವ ಯಾವ ಕಾಲದಲ್ಲಿ ಯಾರು ಯಾರು ಸಾಯಬೇಕೆಂಬುದನ್ನು ನಿರೀಕ್ಷಿಸುತ್ತಿದ್ದು, ಯಮಲೋಕದ ಮಾರ್ಗದಲ್ಲಿ, ಅಂಥವರನ್ನು ರಕ್ಷಿಸುವುದೇ ಇವರ ಕರ್ಮವಿರಬೇಕು. ದುಷ್ಟರನ್ನು ಈ ಮಾರ್ಗದಲ್ಲಿ, ಈ ನಾಯಿಗಳು ಹೋಗಗೊಡುವುದಿಲ್ಲವೆಂಬುದಕ್ಕೆ ಆಧಾರ ಸಾಲದು. ೭-೫೫-೨ರಿಂದ ೫ ವಾಕ್ಯಗಳಲ್ಲಿ ಈ ಅಭಿಪ್ರಾಯ ಬರುತ್ತದೆಂದು ಹೇಳಬಹುದು. ಅಥರ್ವವೇದದಲ್ಲಿ ಯಮನ ದೂತರನ್ನು ನಿರ್ದೇಶಿಸಲು, ಬಹುವಚನ ಮತ್ತು ದ್ವಿವಚನಗಳೆರಡಲ್ಲಿಯೂ ಪದಗಳು ಪ್ರಯೋಗಿಸಲ್ಪಟ್ಟಿವೆ (ಅ. ವೇ. ೮-೨-೧೧; ೮-೮-೧೧; ೫-೩೦-೬). ಎರಡು ನಾಯಿಗಳಲ್ಲಿ ಒಂದು ಶಬಲಾ, ಮತ್ತೊಂದು ಶ್ಯಾಮ (ಅ. ವೇ. ೮-೧-೯). ಯಮ; ಯಮಿಗಳೇ ಈ ಎರಡು ನಾಯಿಗಳೆಂದು ಕೆಲವರೂ, ಸೂರ್ಯ ಚಂದ್ರರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಯಮನು ಪ್ರಕೃತಿಯ ಒಂದಂಶದ ಪ್ರತಿನಿಧಿಯೆಂದೂ, ಅಗ್ನಿಯರೂಪ ವಿಶೇಷ, ಸೂರ್ಯ, ಸಂಧ್ಯಾಕಾಲ, ಅಥವಾ ಅಸ್ತಮಿಸುವ ಸೂರ್ಯ, ಆದುದರಿಂದ ಮೃತ್ಯು ದೇವತೆ ಇರಬಹುದೆಂದೂ ಅಭಿಪ್ರಾಯಪಡುತ್ತಾರೆ.



ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್, ಕ್ಲಾಕ್ ಟವರ್ ಸ್ಕ್ವೈರ್
ಮೈಸೂರು, 1950